# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1476 (1703)

ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 14.03.2022

ಉತ್ತರಿಸುವವರು : ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಾಮಿಲ್ಲುಗಳನ್ನು ಪರಿಶೀಲಿಸಲು ಯಾವ ಹುದ್ದೆಗಳ ಅಧಿಕಾರಿಗಳು ಅಧಿಕಾರ ಹೊಂದಿರುತ್ತಾರೆ; ಈ ಅಧಿಕಾರಿಗಳು ಎಷ್ಟು ದಿನಗಳಿಗೊಮ್ಮೆ ಸಾಮಿಲ್ಲುಗಳ ತಪಾಸಣೆ ಮಾಡಬೇಕಾಗಿರುತ್ತದೆ; ತಪಾಸಣೆ ಸಮಯದಲ್ಲಿ ಯಾವ ಯಾವ ವಿಷಯಗಳ ಕುರಿತು ಗಮನ ಹರಿಸಬೇಕಾಗಿದೆ; ಪ್ರತಿಯೊಂದು ಈ ಮರದ ಮಿಲ್ಲಿನಲ್ಲಿರುವ ಮರಗಳ ಲೆಕ್ಕ ಪಡೆಯಲಾಗುತ್ತಿದೆಯೇ; (ಮಾಹಿತಿ ನೀಡುವುದು) | 1. ಉಪ ವಲಯ ಅರಣ್ಯಾಧಿಕಾರಿ-ಕಂ-ಮೋಜಣಿದಾರರ ದರ್ಜೆಯಿಂದ ಮೇಲ್ಪಟ್ಟ ಹುದ್ದೆಯ ಅಧಿಕಾರಿಗಳು ಅಧಿಕಾರ ಹೊಂದಿರುತ್ತಾರೆ.<br>2. ಸಾಮಿಲ್ಲು ಲೈಸನ್ಸ್ ನವೀಕರಣ ಸಮಯ, ಗಸ್ತು ನಿರತ ಸಂದರ್ಭದಲ್ಲಿ ಮತ್ತು ದೂರರ್ಜಿ ಬಂದ ಸಂದರ್ಭದಲ್ಲಿ ಸಾಮಿಲ್ಲು ತಪಾಸಣೆ ಮಾಡಬಹುದಾಗಿದೆ.<br>3. ಸಾಮಿಲ್ಲು ತಪಾಸಣೆ ಸಮಯದಲ್ಲಿ ಸಾಮಿಲ್‌ನಲ್ಲಿ ದಾಸ್ತಾನಿರುವ ಎಲ್ಲಾ ಸೊತ್ತುಗಳಿಗೆ ಸಂಬಂಧಪಟ್ಟ ಅಧಿಕೃತ ರಹದಾರಿಯಂತೆ ತಾಳೆ ಹೊಂದುತ್ತದೆಯೇ ಎಂದು ಪರಿಶೀಲಿಸಿ ಕೊಳ್ಳಬೇಕಾಗಿರುತ್ತದೆ.<br>ಪ್ರತಿಯೊಂದು ಸಾಮಿಲ್ಲು ಪ್ರತಿ ಮಾಹೆಯಲ್ಲಿ ಅಧಿಕೃತ ರಹದಾರಿ ಮೂಲಕ ಖರೀದಿಸಿದ ಮತ್ತು ವಿಲೇವಾರಿ ಮಾಡಿದ ಸೊತ್ತಿನ ಬಗ್ಗೆ ಮಾಸಿಕ ಮರದ ಲೆಕ್ಕಪತ್ರ ನಮೂನೆ 43 ಮತ್ತು 44ರಲ್ಲಿ ಸಲ್ಲಿಸಬೇಕಾಗಿರುತ್ತದೆ. ಅಂತೆಯೇ ಸಾಮಿಲ್ ಮಾಲಿಕರು ಸಾಮಿಲ್ ಲೆಕ್ಕಪತ್ರವನ್ನು ಸಲ್ಲಿಸುತ್ತಿದ್ದಾರೆ. |
| ಆ) | ಆಶಾ ವುಡ್ ವರ್ಕ್ಸ್ ಕೃಪ್ಪಾವು, ದಕ್ಷಿಣ ಕನ್ನಡ ಜಿಲ್ಲೆ, ಈ ಸಾಮಿಲ್ಲನ್ನು ಕಳೆದ 3 ವರ್ಷಗಳಿಂದ ಪರಿಶೀಲಿಸಿದ ಅಧಿಕಾರಿಗಳು ಯಾರ್ಯಾರು (ಹೆಸರು ಮತ್ತು ಹುದ್ದೆಯೊಂದಿಗೆ ಮಾಹಿತಿ ನೀಡುವುದು); ಈ ಅಧಿಕಾರಿಗಳು ಸದರಿ ಮಿಲ್ಲನ್ನು ಪರಿಶೀಲಿಸಿದ ಸಮಯದಲ್ಲಿ ಆ ಮಿಲ್ಲಿನಲ್ಲಿ ಇದ್ದ ಮರದ ನಾಟಾಗಳ ಸಂಖ್ಯೆ ಎಷ್ಟು; ಎಷ್ಟು ವಿವಿಧ ಮರಗಳ ನಾಟಾ ಅಲ್ಲಿ ಲಭ್ಯವಿತ್ತು; ಅದರಲ್ಲಿ ಅರಣ್ಯ ಇಲಾಖೆಯಿಂದ ಖರೀದಿಸಿದ ಮರಗಳ ಸಂಖ್ಯೆ ಎಷ್ಟು; | ಆಶಾ ವುಡ್ ವರ್ಕ್ಸ್ ಕೃಪ್ಪಾವು, ದಕ್ಷಿಣ ಕನ್ನಡ ಜಿಲ್ಲೆ, ಈ ಸಾಮಿಲ್ಲನ್ನು ಕಳೆದ 3 ವರ್ಷಗಳಿಂದ ಪರಿಶೀಲಿಸಿದ ಅಧಿಕಾರಿಗಳು ಈ ಕೆಳಗಿನಂತಿರುತ್ತಾರೆ. |

| 2018-19 | 2019-20 | 2020-21 | 2021-22 |
|---|---|---|---|
| 1. ಶ್ರೀ ಪಿ. ಶ್ರೀಧರ್, ವಲಯ ಅರಣ್ಯಾಧಿಕಾರಿ<br>2. ಶ್ರೀ ಬಿ. ಜಗರಾಜ್ ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರು | 1. ಶ್ರೀ ಪಿ. ಶ್ರೀಧರ್, ವಲಯ ಅರಣ್ಯಾಧಿಕಾರಿ<br>2. ಶ್ರೀ ಬಿ. ಜಗರಾಜ್, ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರು | 1. ಶ್ರೀ ಪಿ. ಶ್ರೀಧರ, ವಲಯ ಅರಣ್ಯಾಧಿಕಾರಿ<br>2. ಶ್ರೀ ಬಿ. ಜಗರಾಜ್, ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರು | 1. ಶ್ರೀ ಪಿ. ಶ್ರೀಧರ ವಲಯ ಅರಣ್ಯಾಧಿಕಾರಿ (ಜುಲೈವರೆಗೆ)<br>2. ಶ್ರೀ ಬಿ. ಜಗರಾಜ್ ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರು (ಸೆಪ್ಟೆಂಬರ್‌ವರೆಗೆ)<br>3. ಶ್ರೀ ಪ್ರಶಾಂತಕುಮಾರ್ ವಲಯ ಅರಣ್ಯಾಧಿಕಾರಿ (ಅಕ್ಟೋಬರ್‌ನಿಂದ)<br>4. ಶ್ರೀ ಕೆ. ಸುಧೀರ್, ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರು (ಅಕ್ಟೋಬರ್‌ನಿಂದ) |

